## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **944(1073)**

ಸದಸ್ಯರ ಹೆಸರು : ಶ್ರೀ. ಬೋಜೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 16.03.2020

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ದಿನಾಂಕ:01/08/2008ರ ನಂತರ ನೇಮಕಗೊಂಡಿರುವ ಪ್ರೌಢಶಾಲಾ ಸಹ ಶಿಕ್ಷಕರು ಹಾಗೂ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರಿಗೆ ವಿಶೇಷ ಭತ್ಯೆಯನ್ನು ಮೂಲ ವೇತನದಲ್ಲಿ ವಿಲೀನಗೊಳಿಸಲಾಗಿದೆಯೇ; | ಇಲ್ಲ.<br>6ನೇ ವೇತನ ಆಯೋಗದ ಶಿಫಾರಸ್ಸಿನ ಅನ್ವಯ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 06 ಎಸ್‌ಆರ್‌ಪಿ 2018 ದಿನಾಂಕ:19/04/2018ರಲ್ಲಿ ದಿನಾಂಕ:01.08.2008ರ ಪೂರ್ವದಲ್ಲಿ ನೇಮಕಗೊಂಡ ಪ್ರಾಥಮಿಕ ಶಾಲಾ ಶಿಕ್ಷಕರು, ಪ್ರೌಢಶಾಲಾ ಶಿಕ್ಷಕರು ಮತ್ತು ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರುಗಳಿಗೆ ಅವರು ಪಡೆಯುತ್ತಿದ್ದ ವಿಶೇಷ ಭತ್ಯೆಯನ್ನು ಆಯಾ ಶಿಕ್ಷಕರ ಸಂವಾದಿ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಶಿಕ್ಷಕರ ಮೂಲ ವೇತನದೊಂದಿಗೆ ಸೇರಿಸತಕ್ಕದ್ದು ಎಂದು ಆದೇಶಿಸಲಾಗಿದೆ. ಅದರಂತೆ ಅನುಷ್ಠಾನಗೊಳಿಸಲಾಗಿದೆ. |
| ಆ. | ಈ ವಿಷಯವಾಗಿ ಮಾನ್ಯ ಸರ್ವೋಚ್ಛ ನ್ಯಾಯಾಲಯದ ತೀರ್ಪು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ. |
| ಇ. | ಸರ್ಕಾರಕ್ಕೆ ತಿಳಿದಿದ್ದಲ್ಲಿ, ಇದನ್ನು ಜಾರಿಮಾಡಲು ವಿಳಂಬ ರೀತಿ ಅನುಸರಿಸುತ್ತಿರುವುದು ಏಕೆ; | ಪ್ರಶ್ನೆ ಉದ್ಭವಿಸುವುದಿಲ್ಲ |
| ಈ. | ಪದವಿ ಪೂರ್ವ ಕಾಲೇಜುಗಳಲ್ಲಿ ಪಿ.ಹೆಚ್.ಡಿ, ಎಸ್.ಎಲ್.ಇ.ಟಿ, ಎನ್.ಇ.ಟಿ ಪದವಿ ಹೊಂದಿರುವ ಉಪನ್ಯಾಸಕರಿಗೆ ಸರ್ಕಾರ ನೇಮಿಸಿದ ಕುಮಾರ್ ನಾಯ್ಕ್ ಸಮಿತಿ ಶಿಫಾರಸ್ಸಿನ ಪ್ರಕಾರ ಪದವಿ ಕಾಲೇಜಿಗೆ ಬಡ್ತಿ ನೀಡಲಾಗಿದೆಯೇ; ಈ ವಿಷಯವಾಗಿ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | NET /SLET ಪರೀಕ್ಷೆ ತೇರ್ಗಡೆ ಹೊಂದಿದ ಪದವಿ ಪೂರ್ವ ಉಪನ್ಯಾಸಕರುಗಳನ್ನು ಪದವಿ ಕಾಲೇಜಿಗೆ ಬಡ್ತಿ ನೀಡುವ ಶಿಫಾರಸ್ಸನ್ನು ಉನ್ನತ ಶಿಕ್ಷಣ ಇಲಾಖೆಯು ಒಪ್ಪಿರುವುದಿಲ್ಲ. |

ಸಂಖ್ಯೆ: ಇಪಿ 48 ಎಸ್‌ಎಲ್‌ಬಿ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು